ಉತ್ತರ U/S 13/9/2021

## ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 241
ಸದಸ್ಯರ ಹೆಸರು : ಶ್ರೀ ಆರ್.ಧರ್ಮಸೇನ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ)
ಉತ್ತರಿಸಬೇಕಾದ ದಿನಾಂಕ : 13.09.2021
ಉತ್ತರಿಸುವ ಸಚಿವರು : ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಸಚಿವರು

| ಕ್ರಸ | ಪ್ರಶ್ನೆ | ಉತ್ತರ |
|---|---|---|
| ಅ. | ರಾಜ್ಯದಲ್ಲಿ ಅನೇಕ ಸರ್ಕಾರಿ ಶಾಲೆಗಳು ಶಿಥಿಲವಾಗಿ ಅಪಾಯಕಾರಿ ಸ್ಥಿತಿಯಲ್ಲಿದ್ದು, ಅವುಗಳ ದುರಸ್ಥಿ ಪಡಿಸಲು ಯಾವ ಕ್ರಮ ಕೈಗೊಳ್ಳಲಾಗಿದೆ; ಇದಕ್ಕೇನಾದರೂ ವಿಶೇಷ ಕಾರ್ಯಕ್ರಮ ಹಮ್ಮಿಕೊಳ್ಳಲಾಗಿದೆಯೇ; | ರಾಜ್ಯದಲ್ಲಿನ ಸರ್ಕಾರಿ ಶಾಲೆಗಳನ್ನು ಸುಸ್ಥಿತಿಯಲ್ಲಿಡಲು ಸರ್ಕಾರವು ಅಗತ್ಯಕ್ರಮ ಕೈಗೊಂಡಿದ್ದು, ಕಳೆದ ಮೂರು ವರ್ಷಗಳಲ್ಲಿ ಸರ್ಕಾರಿ ಪ್ರಾಥಮಿಕ ಮತ್ತು ಪ್ರೌಢಶಾಲೆಗಳ ಕೊಠಡಿಗಳ ನಿರ್ಮಾಣ ಮತ್ತು ದುರಸ್ಥಿಗೆ ಈ ಕೆಳಕಂಡಂತೆ ಅನುದಾನವನ್ನು ಮಂಜೂರು ಮಾಡಲಾಗಿದೆ. |

**ಕೊಠಡಿ ನಿರ್ಮಾಣ**

| ವರ್ಷ | ಶಾಲೆಗಳ ಸಂಖ್ಯೆ | ಕೊಠಡಿಗಳ ಸಂಖ್ಯೆ | ಬಿಡುಗಡೆಯಾದ ಅನುದಾನ (ಲಕ್ಷಗಳಲ್ಲಿ) |
|---|---|---|---|
| 2018-19 | 1871 | 2909 | 17415.68 |
| 2019-20 | 632 | 973 | 21982.00 |
| 2020-21 | 1006 | 1483 | 9000.00 |
| ಒಟ್ಟು | 3509 | 5365 | 48397.68 |

**ದುರಸ್ಥಿ**

| ವರ್ಷ | ಶಾಲೆಗಳ ಸಂಖ್ಯೆ | ಕೊಠಡಿಗಳ ಸಂಖ್ಯೆ | ಬಿಡುಗಡೆಯಾದ ಅನುದಾನ (ಲಕ್ಷಗಳಲ್ಲಿ) |
|---|---|---|---|
| 2018-19 | 2697 | 4195 | 4242.44 |
| 2019-20 | 1065 | 5003 | 3681.00 |
| 2020-21 | 187 | 187 | 476.11 |
| ಒಟ್ಟು | 3949 | 9385 | 8399.55 |

- 2019-20 ನೇ ಸಾಲಿನಲ್ಲಿ ಆರ್.ಐ.ಡಿ.ಎಫ್-25 ಅಡಿಯಲ್ಲಿ ಅಧಿಕ ಮಳೆಯಿಂದ ಹಾನಿಯಾದ 3386 ಸರ್ಕಾರಿ ಶಾಲೆಗಳ 6469 ಕೊಠಡಿಗಳ ಮರು ನಿರ್ಮಾಣಕ್ಕಾಗಿ ರೂ.75807.30 ಲಕ್ಷಗಳ ಅನುದಾನವನ್ನು ಮಂಜೂರು ಮಾಡಿದೆ.
- 2019-20ನೇ ಸಾಲಿನಲ್ಲಿ ಮಳೆಯಿಂದ ಹಾನಿಗೊಳಗಾದ 6196 ಸರ್ಕಾರಿ ಪ್ರಾಥಮಿಕ ಮತ್ತು ಪ್ರೌಢಶಾಲೆಗಳ 13260 ಕೊಠಡಿಗಳ ದುರಸ್ಥಿಗೆ ರೂ.19951.75 ಲಕ್ಷಗಳ ಅನುದಾನದಲ್ಲಿ

| | | |
|---|---|---|
| | | ಜಿಲ್ಲಾಧಿಕಾರಿಗಳ ಮುಖಾಂತರ ಕ್ರಮ ಕೈಗೊಳ್ಳಲಾಗಿದೆ.<br>• 2020-21 ನೇ ಸಾಲಿನಲ್ಲಿ ಅತಿವೃಷ್ಟಿ/ಪ್ರವಾಹದಿಂದ ಹಾನಿಗೀಡಾದ ಸರ್ಕಾರಿ ಪ್ರಾಥಮಿಕ ಮತ್ತು ಪ್ರೌಢಶಾಲೆಗಳ ತುರ್ತು ದುರಸ್ಥಿಗೆ ರೂ.7557.99 ಲಕ್ಷಗಳ ಅನುದಾನದಲ್ಲಿ ಜಿಲ್ಲಾಧಿಕಾರಿಗಳ ಮುಖಾಂತರ ಕ್ರಮ ಕೈಗೊಳ್ಳಲಾಗಿದೆ |
| ಆ. | ಶಾಲೆಗಳಲ್ಲಿ ಶೌಚಾಲಯ, ಕುಡಿಯುವ ನೀರು, ಪೀಠೋಪಕರಣಗಳು ಮುಂತಾದ ಮೂಲಭೂತ ಸೌಕರ್ಯಗಳ ಕೊರತೆ ಇದ್ದು, ಇದನ್ನು ಸರಿಪಡಿಸಿ ಅನುಕೂಲ ಮಾಡಿಕೊಡಲು ಯಾವ ಕ್ರಮ ಕೈಗೊಳ್ಳಲಾಗಿದೆ: | • 2020-21ನೇ ಸಾಲಿನಲ್ಲಿ ಶಾಲೆಗಳಿಗೆ ಅವಶ್ಯವಿರುವ ಶೌಚಾಲಯ , ಆಟದ ಮೈದಾನ, ಅಡುಗೆ ಕೋಣೆ ಮತ್ತು ಕೈತೋಟ ನಿರ್ಮಾಣಕ್ಕಾಗಿ ಮಹಾತ್ಮ ಗಾಂಧಿ ನರೇಗಾ ಯೋಜನೆಯಡಿಯಲ್ಲಿ ಸಾರ್ವಜನಿಕ ಶಿಕ್ಷಣ ಇಲಾಖೆಯ ಅನುದಾನ ಒಗ್ಗೂಡಿಸುವಿಕೆಯ ಮೂಲಕ ರೂ.2920.99 ಲಕ್ಷಗಳ ಅನುದಾನವನ್ನು ಬಿಡುಗಡೆಗೊಳಿಸಿದೆ.<br>• 2020-21 ನೇ ಸಾಲಿನಲ್ಲಿ ಕುಡಿಯುವ ನೀರು ಮತ್ತು ಶೌಚಾಲಯ ವಾರ್ಷಿಕ ನಿರ್ವಹಣೆಗಾಗಿ ರಾಜ್ಯದ 48012 ಸರ್ಕಾರಿ ಪ್ರಾಥಮಿಕ ಮತ್ತು ಪ್ರೌಢಶಾಲೆಗಳಿಗೆ ಒಟ್ಟು ರೂ.2929.80 ಲಕ್ಷಗಳ ಅನುದಾನವನ್ನು ಬಿಡುಗಡೆಗೊಳಿಸಲಾಗಿದೆ ಹಾಗೂ ಶಾಲೆಗಳಲ್ಲಿ ಕುಡಿಯುವ ನೀರಿನ ಸೌಲಭ್ಯಕ್ಕಾಗಿ ಗ್ರಾಮೀಣಾಭಿವೃದ್ಧಿ ಇಲಾಖೆಯಿಂದ "ಜಲ ಜೀವನ್ ಮಿಷನ್" ಯೋಜನೆಯ ಅಡಿಯಲ್ಲೂ ಸಹ ಕ್ರಮ ಕೈಗೊಳ್ಳಲಾಗಿದೆ.<br>• 2021-22ನೇ ಸಾಲಿನ ಆಯವ್ಯಯದಲ್ಲಿ ಶೌಚಾಲಯ ನಿರ್ವಹಣೆ ಹಾಗೂ ದುರಸ್ಥಿ ಕಾರ್ಯಕ್ರಮದಡಿ ರೂ.50.00ಕೋಟಿಗಳ ಅನುದಾನ ಒದಗಿಸಲಾಗಿದ್ದು ಮಹಾತ್ಮ ಗಾಂಧಿ ನರೇಗಾ ಯೋಜನೆಯಡಿಯಲ್ಲಿ ಸಾರ್ವಜನಿಕ ಶಿಕ್ಷಣ ಇಲಾಖೆಯ ಅನುದಾನ ಒಗ್ಗೂಡಿಸುವಿಕೆಯ ಮೂಲಕ ಶಾಲಾ-ಕಾಲೇಜುಗಳಲ್ಲಿ ಶೌಚಾಲಯ ನಿರ್ಮಿಸಲು ಕ್ರಮವಹಿಸಲಾಗುತ್ತಿದೆ.<br>• 2021-22 ನೇ ಸಾಲಿನ ಆಯವ್ಯಯದಲ್ಲಿ ರಾಜ್ಯದ ಸರ್ಕಾರಿ ಪ್ರಾಥಮಿಕ ಮತ್ತು ಪ್ರೌಢಶಾಲೆಗಳಿಗೆ "ಯಂತ್ರೋಪಕರಣ ಮತ್ತು ಸಾಧನ ಸಾಮಗ್ರಿ" ಅಡಿಯಲ್ಲಿ ಶಾಲಾ-ಕಾಲೇಜುಗಳಿಗೆ ಪೀಠೋಪಕರಣಗಳನ್ನು |

| | | |
|---|---|---|
| | | ಒದಗಿಸಲು ರೂ.5000.00 ಲಕ್ಷಗಳ ಅನುದಾನ ನಿಗದಿಪಡಿಸಿದ್ದು, ಅನುಷ್ಠಾನ ಪ್ರಕ್ರಿಯೆ ಪ್ರಗತಿಯಲ್ಲಿರುತ್ತದೆ. |
| ಇ | ಕರೋನ ಕಾರಣದಿಂದ ಮಕ್ಕಳಿಗೆ ನೀಡುತ್ತಿದ್ದ ಮದ್ಯಾಹ್ನದ ಊಟ, ಹಾಲು ಕೊಡದಿರುವುದರಿಂದ ಬೇರೆ ಯಾವ ವ್ಯವಸ್ಥೆಯನ್ನು ಮಾಡಲಾಗಿದೆ: ಬೇರೆ ಏನಾದರೂ ಕಾರ್ಯಕ್ರಮ ಮಾಡಲಾಗಿದೆಯೇ? | 1) 2021-22ನೇ ಸಾಲಿನಲ್ಲಿ ಕೇಂದ್ರ ಸರ್ಕಾರದ ಸೂಚನೆಯಂತೆ ಮೇ ಮತ್ತು ಜೂನ್-2021ರ ಮಾಹೆಗಳ ಬೇಸಿಗೆ ರಜೆ ಅವಧಿಗೆ ಸಂಬಂಧಿಸಿದಂತೆ 50 ದಿನಗಳ ಅಡುಗೆ ತಯಾರಿಕಾ ವೆಚ್ಚದ ಮೊತ್ತವನ್ನು ಮಧ್ಯಾಹ್ನ ಉಪಹಾರ ಯೋಜನೆಯ 1 ರಿಂದ 8ನೇ ತರಗತಿಯ 45.21 ಲಕ್ಷಗಳ ಫಲಾನುಭವಿ ವಿದ್ಯಾರ್ಥಿಗಳಿಗೆ ನೇರ ನಗರ ವರ್ಗಾವಣೆ ವೇದಿಕೆಯಡಿ (Direct Benefit Transfer) ಪಾವತಿಸಲು ರೂ 134.54 ಕೋಟಿಗಳ ಅನುದಾನವನ್ನು ಒದಗಿಸಲಾಗಿದೆ.<br>2) 2021-22ನೇ ಸಾಲಿನಲ್ಲಿ ರಾಜ್ಯ ಸರ್ಕಾರದ ಕೋವಿಡ್-19ರ 2ನೇ ಪ್ಯಾಕೇಜ್ ಘೋಷಣೆಯಂತೆ ಕ್ಷೀರಭಾಗ್ಯ ಯೋಜನೆಯ 56.64 ಲಕ್ಷ ಫಲಾನುಭವಿ ವಿದ್ಯಾರ್ಥಿಗಳಿಗೆ ಪೌಷ್ಟಿಕಾಂಶ ಕೊರತೆಯಾಗದಂತೆ ಸರಿದೂಗಿಸಲು ಜೂನ್-2021 ಮತ್ತು ಜುಲೈ-2021ರ ಮಾಹೆಗಳಿಗೆ ಎರಡು ತಿಂಗಳ ಅವಧಿಗೆ ಪ್ರತಿ ವಿದ್ಯಾರ್ಥಿಗೆ ಪ್ರತಿ ತಿಂಗಳು ಅರ್ಧ ಕೆ.ಜಿ ಯಂತೆ ಕೆನೆಭರಿತ ಹಾಲಿನ ಪುಡಿಯ ಪ್ಯಾಕೇಟ್‌ಗಳನ್ನು ವಿತರಣೆ ಮಾಡಲು ರೂ.163.71 ಕೋಟಿಗಳ ಅನುದಾನವನ್ನು ಒದಗಿಸಲಾಗಿದ್ದು, ಹಾಲಿನ ಪ್ಯಾಕೆಟ್‌ಗಳನ್ನು ವಿದ್ಯಾರ್ಥಿಗಳಿಗೆ ವಿತರಿಸಲಾಗಿದೆ.<br>3) 2021-22ನೇ ಸಾಲಿನಲ್ಲಿ ಏಪ್ರಿಲ್-2021, ಜುಲೈ, ಆಗಸ್ಟ್ ಮತ್ತು ಸೆಪ್ಟೆಂಬರ್-2021ರ ಮಾಹೆಗಳಲ್ಲಿ ಒಟ್ಟಾರೆ 92 ದಿನಗಳಿಗೆ 1 ರಿಂದ 10ನೇ ತರಗತಿ ವಿದ್ಯಾರ್ಥಿಗಳಿಗೆ ಆಹಾರ ಭದ್ರತಾ ಭತ್ಯೆಯ ರೂಪದಲ್ಲಿ ಆಹಾರ ಧಾನ್ಯಗಳನ್ನು ಮತ್ತು ಅಡುಗೆ ತಯಾರಿಕಾ ವೆಚ್ಚಕ್ಕೆ ಪ್ರತಿಯಾಗಿ ತೊಗರಿಬೇಳೆ, ಖಾಧ್ಯತೈಲ ಹಾಗೂ ಉಪ್ಪನ್ನು ವಿತರಣೆ ಮಾಡುವುದರ ಮೂಲಕ ಮಧ್ಯಾಹ್ನ ಉಪಹಾರ ಯೋಜನೆಯನ್ನು ಅನುಷ್ಠಾನ ಮಾಡಲು ಮತ್ತು ಜೂನ್-2021 ರಿಂದ ಸೆಪ್ಟೆಂಬರ್-2021ರವರೆಗೆ 04 ತಿಂಗಳ ಅವಧಿಗೆ ಅಡುಗೆ ಸಿಬ್ಬಂದಿಗಳ ಸಂಭಾವನೆಯನ್ನು ಪಾವತಿಸಲು ರೂ.519.02 |

| | | |
|---|---|---|
| | | ಕೋಟಿಗಳ ಅನುದಾನವನ್ನು ಒದಗಿಸಲಾಗಿದ್ದು, ಮೊದಲ ಹಂತದಲ್ಲಿ 92 ದಿನಗಳ ಅವಧಿಯಲ್ಲಿ 67 ದಿನಗಳ ಅವಧಿಗೆ ಆಹಾರ ಧಾನ್ಯಗಳನ್ನು ವಿತರಿಸಲು ಕ್ರಮವಹಿಸಲಾಗಿದೆ.<br>4) ಬಿಸಿಯೂಟ ನೀಡದಿರುವುದರಿಂದ ಮಕ್ಕಳಿಗೆ ಪೋಷಕಾಂಶದ ಕೊರತೆ ಉಂಟಾಗುವುದನ್ನು ತಪ್ಪಿಸಲು ಮಕ್ಕಳಿಗೆ ಕೇಂದ್ರ ಸರ್ಕಾರದ ಮಾರ್ಗಸೂಚಿ ಮತ್ತು ರಾಷ್ಟ್ರೀಯ ಆಹಾರ ಭದ್ರತಾ ಕಾಯಿದೆ-2013ರಲ್ಲಿನ ಮಾನದಂಡಗಳಂತೆ ನಿಗದಿತ ಪ್ರಮಾಣದ ಆಹಾರ ಧಾನ್ಯಗಳನ್ನು (ಅಕ್ಕಿ ಮತ್ತು ಗೋಧಿ) ಮತ್ತು ಅಡುಗೆ ತಯಾರಿಕಾ ವೆಚ್ಚದ ಮೊತ್ತಕ್ಕೆ ಪ್ರತಿಯಾಗಿ ತೊಗರಿಬೇಳೆ, ಖಾದ್ಯತೈಲ ಮತ್ತು ಅಯೋಡಿಕರಿಸಿದ ಉಪ್ಪನ್ನು ಆಹಾರ ಭದ್ರತಾ ಭತ್ಯೆಯ ರೂಪದಲ್ಲಿ ನೀಡಿ, ಮಕ್ಕಳಲ್ಲಿ ಪೋಷಕಾಂಶದ ಕೊರತೆಯಾಗದಂತೆ ಕ್ರಮವಹಿಸಲಾಗಿದೆ. |

**ಇಪಿ:186 ಯೋಸಕ 2021**

(ಬಿ.ಸಿ.ನಾಗೇಶ್)

**ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಸಚಿವರು**